ಇರುವ ಕಾರಣ, ಉಲ್ಲೇಖ (6) ರಲ್ಲಿನ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರ ವರದಿಯನ್ನಾಧರಿಸಿ ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(9):ಸಿಆರ್-205:1982-83, ಬೆಂಗಳೂರು, ದಿನಾಂಕ: 29ನೇ ಜೂನ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀಮತಿ ಎಂ.ಆರ್. ಪ್ರಭಾವತಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಘಟಕ, ಬಾಸೂರು, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ದಿನಾಂಕ: 1.9.1981 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಿ ಆಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ದಂಡನೆಯಾಗಿ ಕೆ.ಸಿ.ಎಸ್. (ಸಿಸಿಎ) ನಿಯಮ 8(viii)ರ ಪ್ರಕಾರ ಈ ಕೂಡಲೇ ಜಾರಿಗೆ ಬರುವಂತೆ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು-9.

ಪಿ.ಆರ್. 1045

**ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು**

**ವಿಷಯ:** ಶ್ರೀಮತಿ ಪಿ. ಯಶವಂತಿ, ಶುಶ್ರೂಷಕಿ, ಜಿಲ್ಲಾ ಆಸ್ಪತ್ರೆ, ಹಾಸನ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ - ಅಂತಿಮ ಆದೇಶ.

**ಓದಲಾಗಿದೆ:**
1. ಜಿಲ್ಲಾ ಶಸ್ತ್ರ ಚಿಕಿತ್ಸಕರು, ಶ್ರೀ ಚಾಮರಾಜೇಂದ್ರ ಆಸ್ಪತ್ರೆ, ಹಾಸನ ಇವರ ಪತ್ರ ಸಂಖ್ಯೆ: ಕೆಹೆಚ್ಎಸ್ಡಿಪಿ:ಸಿ:145: 1999-2000, ದಿನಾಂಕ: 1.10.1999 ಮತ್ತು ದಿನಾಂಕ: 11.2.2005.
2. ಮರುಕರೆ ಪತ್ರ ಸಂಖ್ಯೆ: ಶ್ರೀಚಾಅ:ಹಾ:ಕಅಪಅಯೋ:ಸಿವಿ:32:1998-99, ದಿನಾಂಕ: 28.9.1998, ದಿನಾಂಕ: 26.11.1998.

**ಪ್ರಸ್ತಾವನೆ:**

ಶ್ರೀಮತಿ ಪಿ. ಯಶವಂತಿ, ಶುಶ್ರೂಷಕಿ, ಇವರು ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಎನ್ಆರ್ಎಸ್(3):341:1997-98, ದಿನಾಂಕ: 8ನೇ ಜೂನ್ 1998ರ ಪ್ರಕಾರ ಶುಶ್ರೂಷಕಿ ಆಗಿ ಜಿಲ್ಲಾ ಆಸ್ಪತ್ರೆ, ಹಾಸನ, ಇಲ್ಲಿಗೆ ನೇಮಕಾತಿ ಹೊಂದಿ, ದಿನಾಂಕ: 17.8.1998 ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡು, ದಿನಾಂಕ: 19.8.1998 ರಿಂದ ಕೆಲಸಕ್ಕೆ ಯಾವ ವಿಧವಾದ ರಜೆ ಅರ್ಜಿಯನ್ನು ಸಲ್ಲಿಸದೇ ಗೈರುಹಾಜರಾಗಿದ್ದು, ಮೇಲೆ ಓದಲಾದ ಪತ್ರ (2) ರಲ್ಲಿ ಕರ್ತವ್ಯಕ್ಕೆ ಮರು ಹಾಜರಾಗುವಂತೆ ಸೂಚಿಸಿದ್ದರೂ ಸಹ ಮರುಕರೆ ಪತ್ರಗಳನ್ನು ಸ್ವೀಕರಿಸಿ, ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಖಾಯಂ ಪೂರ್ವ ಸೇವಾವಧಿ ಘೋಷಣೆ ಆಗದೇ, ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1972ರ ನಿಯಮಗಳ ಅಡಿಯಲ್ಲಿ ಇವರನ್ನು ಸೇವೆಯಿಂದ ತೆಗೆದುಹಾಕುವಂತಹ ದಂಡನೆಗೆ ಗುರಿಯಾಗಿರುತ್ತಾರೆ. ನೌಕರರು ಗೈರುಹಾಜರಾಗುವ ಮೂಲಕ ಸಾರ್ವಜನಿಕರಿಗೆ ತೊಂದರೆ ಉಂಟು ಮಾಡಿರುವುದರಿಂದ ಮತ್ತು ಸರ್ಕಾರಿ ಸೇವಾ ನಿಯಮಗಳನ್ನು ಉಲ್ಲಂಘಿಸಿರುವುದರಿಂದ, ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ತೀರ್ಮಾನಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(3):ಸಿಆರ್-54:1998-99, ಬೆಂಗಳೂರು, ದಿನಾಂಕ: 30ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀಮತಿ ಪಿ. ಯಶವಂತಿ, ಶುಶ್ರೂಷಕಿ, ಜಿಲ್ಲಾ ಆಸ್ಪತ್ರೆ, ಹಾಸನ, ಇವರು ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನವೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ (ಪ್ರೊಬೇಷನ್) ನಿಯಮಗಳು 1977ರ ನಿಯಮ 6(1) ಮತ್ತು 6(2)ರ ಪ್ರಕಾರ ಇವರು ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ, ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ (ಡಿಸ್‌ಚಾರ್ಜ್) ತೆಗೆದುಹಾಕಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

ಪಿ.ಆರ್. 1046

**ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು**

**ವಿಷಯ:** ಶ್ರೀ ವೆಂಕಟೇಶ್, ಕಿರಿಯ ಆರೋಗ್ಯ ಸಹಾಯಕ (ಪುರುಷ ಪ್ರಾ.ಆ.ಕೇಂದ್ರ, ವಿಟ್ಲ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಜಿಲ್ಲಾ ಆಕುಕ ಅಧಿಕಾರಿಗಳು, ದಕ್ಷಿಣ ಕನ್ನಡ, ಮಂಗಳೂರು, ಇವರ ಪತ್ರ ಸಂ: ಕಿಆಸ:266:2004-05, ದಿ: 15.2.2005 ಮತ್ತು 19.5.2005.
2. ನಿರ್ದೇಶನಾಲಯದ ಸಮ ಸಂಖ್ಯೆ ಪತ್ರ ದಿನಾಂಕ: 19.4.2005.
3. ಮರುಕರೆ ಪತ್ರ (ವೈದ್ಯಾಧಿಕಾರಿ, ಪ್ರಾಆಕೇ, ವಿಟ್ಲ, ಇವರಿಂದ) ಸಂಖ್ಯೆ: ಇಎಸ್‌ಟಿ-67:2004-05, ದಿ: 7.7.04, 25.11.04, 8.12.04 ಮತ್ತು 10.1.05.

**ಪ್ರಸ್ತಾವನೆ:**

ಶ್ರೀ ವೆಂಕಟೇಶ್, ಕಿರಿಯ ಆರೋಗ್ಯ ಸಹಾಯಕ (ಪುರುಷ) ಪ್ರಾಥಮಿಕ ಆರೋಗ್ಯ ಕೇಂದ್ರ, ವಿಟ್ಲ, ಇವರು ನಿರ್ದೇಶನಾಲಯದ ಅಧಿಸೂಚನೆ ಸಂ: ವಿನೇಚ:28:03-04, ದಿನಾಂಕ: 19.1.2004ರ ಪ್ರಕಾರ ವೇತನ ಶ್ರೇಣಿ 3300-6300 ರಲ್ಲಿ ಕಿರಿಯ ಆರೋಗ್ಯ ಸಹಾಯಕ (ಪುರುಷ) ಆಗಿ

ನೇಮಕಾತಿ ಮಾಡಿದ್ದು ಆದೇಶದಲ್ಲಿ ಸೂಚಿಸಲಾದಂತೆ ದಿನಾಂಕ: 8.6.2004 ರಂದು ಕರ್ತವ್ಯಕ್ಕೆ ಹಾಜರಾಗಿದ್ದು ದಿ: 10.6.2004 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಾಗಿರುತ್ತಾರೆ. ಉಲ್ಲೇಖ (3)ರಲ್ಲಿ ನಮೂದಿಸಿರುವ ದಿನಾಂಕಗಳಂದು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಮರುಕರೆ ಪತ್ರಗಳನ್ನು ಕಳುಹಿಸಲಾಗಿದ್ದರೂ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ದುರ್ನಡತೆ ಆಗಿರುತ್ತದೆ.

ನೌಕರರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ದಕ್ಷಿಣಕನ್ನಡ, ಮಂಗಳೂರು, ಇವರು ತಮ್ಮ ದಿ: 15.2.2005 ಮತ್ತು 19.5.2005 ರ ಪತ್ರಗಳಲ್ಲಿ ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(8):ಸಿಆರ್-111:2004-05, ಬೆಂಗಳೂರು, ದಿನಾಂಕ: 13ನೇ ಜುಲೈ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ವೆಂಕಟೇಶ್, ಕಿ.ಆ.ಸ. ಸಮುದಾಯ ಆರೋಗ್ಯ ಕೇಂದ್ರ, ವಿಟ್ಲ, ಬಂಟ್ವಾಳ ತಾಲ್ಲೂಕು ಇವರು ದಿ: 8.6.2004 ರಂದು ಸರ್ಕಾರಿ ಸೇವೆಗೆ ಸೇರಿದ ನಂತರ ದಿ: 10.6.2004 ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ತಿಳಿಸಿರುವ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ವರದಿಯನ್ನು ಆಧರಿಸಿ, ಸದರಿ ನೌಕರರು ಇನ್ನೂ ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನವೇ ಅನಧಿಕೃತ ಗೈರುಹಾಜರಿಯಲ್ಲಿರುವುದರಿಂದ ಕೆ.ಸಿ.ಎಸ್. (ಪ್ರೊಬೇಷನ್) ನಿಯಮ 1977ರ ನಿಯಮ 6(1) ಮತ್ತು 6(2) ರ ಪ್ರಕಾರ ಇವರು ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ (ಡಿಸ್‌ಚಾರ್ಜ್) ತೆಗೆದುಹಾಕಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

ಪಿ.ಆರ್. 1047

**ಸುಬ್ರಹ್ಮಣ್ಯನಗರ ಪೊಲೀಸ್ ಠಾಣೆ, ಬೆಂಗಳೂರು**

**ನಂ. ಬಿ5/ಪಿ.ಎಸ್./ಸಿಸಿ/35/2005, ದಿನಾಂಕ: 19ನೇ ಜುಲೈ 2005**

**ವಿಷಯ:** ವಾರಸುದಾರರು ಇಲ್ಲದೇ ಸುಬ್ರಹ್ಮಣ್ಯನಗರ ಪೊಲೀಸ್ ಠಾಣೆಯಲ್ಲಿರುವ ಸ್ವತ್ತುಗಳ ಮಾಲೀಕರನ್ನು ಪತ್ತೆ ಮಾಡುವ ಬಗ್ಗೆ.

**ಉಲ್ಲೇಖ:** 1. ಬೆಂಗಳೂರು ನಗರ ಸುಬ್ರಹ್ಮಣ್ಯನಗರ ಪೊಲೀಸ್ ಠಾಣೆ ಎನ್.ಸಿ.ಆರ್. ಸಂಖ್ಯೆ: 356/2001 ಮತ್ತು ಎನ್.ಸಿ.ಆರ್ ಸಂಖ್ಯೆ: 478/2003.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ, ಬೆಂಗಳೂರು ನಗರದ ಸುಬ್ರಹ್ಮಣ್ಯನಗರ ಪೊಲೀಸ್ ಠಾಣೆಯಲ್ಲಿ ಈ ಕೆಳಗೆ ನಮೂದಿಸಿರುವ ಸ್ವತ್ತುಗಳು ವಾರಸುದಾರರು ಇಲ್ಲದೇ ಇದ್ದು, ಸದರಿ ಸ್ವತ್ತುಗಳ ವಾರಸುದಾರರನ್ನು ಪತ್ತೆ ಮಾಡಲು ಎಲ್ಲಾ ರೀತಿಯ ಕ್ರಮ ಜರುಗಿಸಿದ್ದು, ಅಲ್ಲದೇ ಬೆಂಗಳೂರು ನಗರ ಎಲ್ಲಾ ಪೊಲೀಸ್ ಠಾಣೆಗಳ ಠಾಣಾಧಿಕಾರಿಗಳವರಿಗೆ ಸಿಬ್ಬಂದಿ ನಿಯೋಜಿಸಿ, ಸುತ್ತೋಲೆ ಮುಖೇನ ಕಳುಹಿಸಿದ್ದು, ಸದರಿ ಸ್ವತ್ತುಗಳ ಮಾಲೀಕರ ಬಗ್ಗೆ ಯಾವುದೇ ರೀತಿಯ ಮಾಹಿತಿಯು ಸಿಕ್ಕಿರುವುದಿಲ್ಲ.

ಆದುದರಿಂದ ಈ ಕೆಳಕಂಡ ಸ್ವತ್ತುಗಳ ಮಾಲೀಕರುಗಳನ್ನು ಪತ್ತೆ ಮಾಡುವ ಬಗ್ಗೆ, ಈ ಪ್ರಕಟಣೆಯನ್ನು ನೀಡಲಾಗಿದೆ.

**ಸ್ವತ್ತುಗಳ ವಿವರ ಈ ಕೆಳಕಂಡಂತೆ ಇರುತ್ತದೆ**

| ಕ್ರಮ ಸಂಖ್ಯೆ | ಪೊಲೀಸ್ ಠಾಣೆ ಹೆಸರು | ಮಾಲುಗಳ ವಿವರ | ಎನ್.ಸಿ.ಆರ್ ಸಂಖ್ಯೆ | ಮಾಲು ಪಟ್ಟಿ ಸಂಖ್ಯೆ | ಅಮಾನತ್ತು ದಿನಾಂಕ |
|---|---|---|---|---|---|
| 1 | ಸುಬ್ರಹ್ಮಣ್ಯನಗರ | 1) ಒಂದು ಅಕಾಯ್ ಪೋರ್ಟೆಬಲ್ ಬಣ್ಣದ ಟಿ.ವಿ. | 356/2001 | 73/2001 | 29.7.2001 |
| 2 | ಸುಬ್ರಹ್ಮಣ್ಯನಗರ | 2) ಒಂದು ಫಿಲಿಪ್ಸ್ ಟೇಪ್ ರೆಕಾರ್ಡರ್ | 356/2001 | 73/2001 | 29.7.2001 |
| 3 | ಸುಬ್ರಹ್ಮಣ್ಯನಗರ | 1) ಒಂದು ಹಸಿರು ಬಣ್ಣದ 307 ಮೆಟೋಡರ್ ನಂಬರ್ ಸಿ.ಎ.ವೈ. 807 ಮುಂಭಾಗದಲ್ಲಿ ಎರಡು ಚಕ್ರಗಳು ಮತ್ತು ಇಂಜಿನ್ ಸಹಾ ಇರುವುದಿಲ್ಲ | 478/2003 | 51/2003 | 3.8.2003 |
| 4 | ಸುಬ್ರಹ್ಮಣ್ಯನಗರ | 2) ಒಂದು ಫಿಯಟ್ ಹಳೆಯ ಕಾರ್ ನಂಬರ್ ಕೆ.ಎ. 03 ಆರ್-2563 ಅದರ ಬಾಡಿಯು ಸುಟ್ಟಿರುವಂತೆ, ಕಾಣುತ್ತದೆ, ಬಿಳಿಯ ಬಣ್ಣದಂತೆ ಕಾಣುತ್ತದೆ | 478/2003 | 51/2003 | 3.8.2003 |
| 5 | ಸುಬ್ರಹ್ಮಣ್ಯನಗರ | 3) ಒಂದು ಬಿಳಿಯ ಬಣ್ಣದ ಡಾಲ್ಫಿನ್ ಕಾರ್ ಇದರ ನಂಬರ್ ಪ್ಲೇಟಿನ ಮೇಲೆ ಬಣ್ಣ ಬಳಿದಿದ್ದು ನಂಬರ್ ಟಿ.ಎನ್.-01 ಎ-6108 ಅಂತ ಕಾಣುತ್ತದೆ. ಮುಂಭಾಗದಲ್ಲಿ ಗ್ಲಾಸು ಇರುವುದಿಲ್ಲ. | | | |

**ಹೆಚ್. ವೀರಭದ್ರೇಗೌಡ**
ಪೊಲೀಸ್ ಇನ್ಸ್‌ಪೆಕ್ಟರ್, ಠಾಣಾಧಿಕಾರಿ
ಸುಬ್ರಹ್ಮಣ್ಯನಗರ ಪೊಲೀಸ್ ಠಾಣೆ
ಬೆಂಗಳೂರು ನಗರ

ಪಿ.ಆರ್. 1048

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು

**ವಿಷಯ:** CNT 9339 (S/C.) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಮಾಲೀಕರು ಶ್ರೀ ಬಿ. ತಿಪ್ಪೇಸ್ವಾಮಿ, ತರಿಕೆರೆ ತಾಲ್ಲೂಕು ಇವರ ಅರ್ಜಿ ದಿನಾಂಕ: 15.1.2002.
2. ಅಧ್ಯರ್ಪಣ ಸಂ. 37/01-02, ದಿ: 31.7.2001.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ: 1.4.2003.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: CNT 9339 (S/C.) ಇದರ ನೋಂದಾಯಿತ ಮಾಲೀಕರಾದ ಶ್ರೀ ಬಿ. ತಿಪ್ಪೇಸ್ವಾಮಿ, ಕಲ್ಲಟಿಪುರ, ತರಿಕೆರೆ ರವರು ಸದರಿ ವಾಹನದ ತೆರಿಗೆಯನ್ನು 31.7.2001 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂ: 37/01-02 ರಲ್ಲಿ ದಿ: 31.7.2001 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿ: 15.1.2002 ರಂದು ಅರ್ಜಿ ಸಲ್ಲಿಸಿ ಈ ವಾಹನವು 19ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೋಂದಣಿ ರದ್ದುಪಡಿಸಲು ಕೋರಿರುತ್ತಾರೆ. ಪೂರಕವಾಗಿ ಈ ಕಛೇರಿಯಿಂದ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿ: 1.4.2003 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ**

**ಸಂ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:04/05-06, ದಿನಾಂಕ: 17ನೇ ಮೇ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: CNT 9339 (S/C.) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

| ವಾಹನದ ವಿವರಗಳು | 1. ವಾಹನ ಸಂ | CNT 9339 |
|---|---|---|
| | 2. ವರ್ಗ | Stage Carriage |
| | 3. ಮಾಡೆಲ್ | 1986 |
| | 4. ತಯಾರಿಕೆ | TDV |
| | 5. ಚಾಸಿಸ್ ಸಂ | 344050235504 |
| | 6. ಯಂತ್ರ ಸಂ | 692D23243041 |
| | 7. ತೆರಿಗೆ ಪಾವತಿ | 31-7-2001 |
| | 8. ಹೆಚ್.ಪಿ.ಎ. | NIL |
| | 9. ನೋಂದಣಿ ದಿನಾಂಕ | 11-8-1986 |
| | 10. ಎಸ್ ಆರ್ ಸಂ | 37/01-02 dt. 31-7-2001 |
| | 11. ಮಾಲೀಕರು | Sri B. Thippeswamy S/o. Sri Basappa, Ballavara, Kallatipura, Tarikere, Chikmagalur District |

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್. 1049

**ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಂತಿಮ ಅಧಿಸೂಚನೆ**

**ನಂ. ಕೆ.ಎಸ್.ಎ:ಸಿ.ಆರ್:37/94-95, ದಿನಾಂಕ: 16ನೇ ಜೂನ್ 2005**

ನಂ. ಕೆ.ಎಸ್.ಎ:ಸಿ.ಆರ್. 37/94-95, ದಿನಾಂಕ: 29.6.2004ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಕೋರಮಂಗಲ ಈಜಿಪುರದ-ಬಿ-ವಿಭಾಗದ ಕೊಳಚೆ ಪ್ರದೇಶ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ, ಕೋರಮಂಗಲ ಈಜಿಪುರ-ಬಿ-ವಿಭಾಗದ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ.ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 |
| 1 | ಕೋರಮಂಗಲ ಈಜಿಪುರದ-ಬಿ-ವಿಭಾಗದ ಕೊಳಚೆ ಪ್ರದೇಶ | ಸರ್ಕಾರಿ ಕೆರೆ | 101 | 1.22 ಎಕರೆ: ಗುಂಟೆ | ಸರ್ಕಾರಿ ಕೆರೆ ಉಳಿಕೆ ಭಾಗ | ಹಳ್ಳ | ಈಜಿಪುರ "ಎ" ಭಾಗದ ಕೊಳಚೆ ಪ್ರದೇಶ | ಕೆರೆ ಉಳಿಕೆ ಭಾಗ |

**ಎಂ.ಎ. ಸಾಧಿಕ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 1050

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 162 ಸಅಸೇ 2005, ದಿನಾಂಕ: 11ನೇ ಜುಲೈ 2005**

ಶ್ರೀ ಹೆಚ್.ಸಿ. ನಾಗರಾಜಯ್ಯ, ಹಿರಿಯ ಮ್ಯಾನೇಜರ್, ಇಂಡಿಯನ್ ಬ್ಯಾಂಕ್, ಮುಂಬಯಿ ಇವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ವಿಶೇಷಾಧಿಕಾರಿ (ಬ್ಯಾಂಕಿಂಗ್) ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 15(ಬಿ) (ii)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆವಿಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಗುತ್ತಿಗೆ ಆಧಾರದ ಮೇರೆಗೆ ನೇಮಕ ಮಾಡಲಾಗಿದೆ.

ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳಿಗೆ ಸಂಬಂಧಿಸಿದ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2)

ಪಿ.ಆರ್. 1051

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**

**ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣ ಸಂಖ್ಯೆ: ಕಾಅಿದಾ:ಕಾನಪ:ಸಿಆರ್-185/2005, ದಿನಾಂಕ: 6ನೇ ಜುಲೈ 2005**

**ಅರ್ಜಿದಾರರು:**

1. ರಾಜಪ್ಪ ಬಿನ್ ಬಸಪ್ಪ ಹಾಗೂ ಇತರ 3 ಜನರು
ವಾಸ: ವಡ್ನಾಳ್ ಗ್ರಾಮ, ಚನ್ನಗಿರಿ ತಾಲ್ಲೂಕು,
ದಾವಣಗೆರೆ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**

1. ವಿ.ಸಿ. ರುದ್ರಮುನಿ ಬಿನ್ ಲೇ: ಚನ್ನಬಸಪ್ಪ
ಸ್ವರಾಜ್ ಮಜ್ದ ಮಾಲೀಕರು,
ನಂ. ಕೆ.ಎ. 17/6872
ವಾಸ: ವಡ್ನಾಳ್ ಗ್ರಾಮ, ಚನ್ನಗಿರಿ ತಾಲ್ಲೂಕು
ದಾವಣಗೆರೆ ಜಿಲ್ಲೆ
2. ದಿ. ಡಿವಿಜನಲ್ ಮ್ಯಾನೇಜರ್
ನ್ಯಾಷಿನಲ್ ಇನ್ಸೂರೆನ್ಸ್ ಕಂ. ಲಿ.
ಬಿನ್ನಿ ಕಂಪನಿ ರಸ್ತೆ, ಚಾಮರಾಜಪೇಟೆ
ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ರಾಜಪ್ಪ (ತಂದೆ), ರತ್ನಮ್ಮ (ತಾಯಿ), ಪ್ರೇಮ (ತಂಗಿ), ಯೋಗೇಶ್ (ತಮ್ಮ) ಇವರುಗಳಾದ ತಾವು ಮೃತ ವಿ.ಆರ್. ದಿನೇಶ್ ಇವರ ತಂದೆ ಮತ್ತು ತಾಯಿ, ತಂಗಿ, ತಮ್ಮ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವಿ.ಆರ್. ದಿನೇಶ್ ರವರು ಒಂದನೇ ಪ್ರತಿವಾದಿಗಳಾದ ವಿ.ಸಿ. ರುದ್ರಮುನಿ ಇವರ ಸ್ವರಾಜ್ ಮಜ್ದದಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1052

## ತಹಸೀಲ್ದಾರ್ ಹಾಗೂ ತಾಲ್ಲೂಕು ದಂಡಾಧಿಕಾರಿಗಳವರ ನ್ಯಾಯಾಲಯ, ಹೊಳೆನರಸೀಪುರ ತಾಲ್ಲೂಕು: ಹೊಳೆನರಸೀಪುರ ರವರ ನ್ಯಾಯಾಲಯ ನಡವಳಿಗಳು

**ವಿಷಯ:** ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ ಕಲಂ 144ರ ಅನ್ವಯ ಹೊಳೆನರಸೀಪುರ ತಾಲ್ಲೂಕು ಹೇಮಾವತಿ ನದಿ ಪಾತ್ರದ ಮರಳು ತೆಗೆದು ಸಾಗಾಟ ಮಾಡುವುದರ ನಿಷೇಧಾಜ್ಞೆ ವಿಸ್ತರಿಸಿರುವ ಬಗ್ಗೆ.

**ಉಲ್ಲೇಖ:**
1. ಈ ನ್ಯಾಯಾಲಯದ ಸಮಸಂಖ್ಯೆ ಆದೇಶ ದಿನಾಂಕ: 7.1.05, 22.1.05 ಮತ್ತು 15.4.05.
2. ಹಿರಿಯ ಭೂ ವಿಜ್ಞಾನಿಗಳು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹಾಸನ ರವರ ಪತ್ರ ಸಂ: ಸಾ.ಮ.ಹ. 658:05, ದಿನಾಂಕ: 13.5.05 ಮತ್ತು 30.6.05.
3. ಮಾನ್ಯ ಉಪವಿಭಾಗಾಧಿಕಾರಿಗಳು, ಹಾಸನ ಉಪವಿಭಾಗ, ಹಾಸನ ರವರ ಪತ್ರ ಸಂ: ಎಂಎಜಿ-76: 2004, ದಿನಾಂಕ: 14.6.05.
4. ಆರಕ್ಷಕ ಉಪ ಅಧೀಕ್ಷಕರು, ಹೊಳೆನರಸೀಪುರ ರವರ ಫ್ಯಾಕ್ಸ್ ಪತ್ರ ನಂ. ಎಸ್‌ಇಪಿಓ:ಹೆಚ್‌ಎನ್‌ಪಿ:ಸಿಸಿ:160:05, ದಿನಾಂಕ: 14.6.05.
5. ಮಾನ್ಯ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ರವರ ಪತ್ರ ನಂ. ಐಎನ್‌ಡಿ-9:05, ದಿನಾಂಕ: 27.6.05.
6. ಆರಕ್ಷಕ ವೃತ್ತ ನಿರೀಕ್ಷಕರು, ಹೊಳೆನರಸೀಪುರ ರವರ ಪತ್ರ ಸಂ. ಸಿಪಿಇ:ಹೆಚ್‌ಎನ್‌ಪಿ:ಸಿಸಿ:94:05, ದಿನಾಂಕ: 16.7.05.

**ಪ್ರಸ್ತಾವನೆ:**

ಹಾಸನ ಜಿಲ್ಲಾ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಹಿರಿಯ ಭೂ ವಿಜ್ಞಾನಿಗಳು ಉಲ್ಲೇಖ (2)ರ ಪತ್ರದಲ್ಲಿ ಮಾನ್ಯ ಜಿಲ್ಲಾಧಿಕಾರಿಗಳೊಂದಿಗೆ ಮತ್ತು ಈ ಕಛೇರಿಗೆ ವರದಿ ಮಾಡುತ್ತಾ ಕೆಲವು ವ್ಯಕ್ತಿಗಳು ಹೇಮಾವತಿ ನದೀ ಪಾತ್ರದಲ್ಲಿ ಯಾವುದೇ ಪರವಾನಗಿ ಪಡೆಯದೇ ಯಾಂತ್ರಿಕ ಉಪಕರಣಗಳನ್ನು ಬಳಸಿ ಮರಳು ತೆಗೆಯುತ್ತಿರುವುದಾಗಿಯೂ ಹಾಗೂ ಸಾಗಾಣಿಕೆ ಮಾಡುತ್ತಿರುವುದಾಗಿಯೂ ಇದರಿಂದ ಸರ್ಕಾರಕ್ಕೆ ನಷ್ಟ ಉಂಟಾಗುತ್ತಿದೆಯೆಂದು ಅಲ್ಲದೇ ಯಾಂತ್ರಿಕ ಉಪಕರಣಗಳನ್ನು ಬಳಸುತ್ತಿರುವುದರಿಂದ ನದಿಯ ಪಾತ್ರದಲ್ಲಿ ಅನೇಕ ದುಷ್ಪರಿಣಾಮಗಳು ಉಂಟಾಗುತ್ತವೆ ಎಂದು ಪರಿಸರದ ಮೇಲೆ ಪರಿಣಾಮ ಬೀರುತ್ತದೆಂದು, ಜಲಚರಗಳ ಮೇಲೂ ಪರಿಣಾಮ ಉಂಟಾಗುತ್ತದೆಯೆಂದು ಅಲ್ಲದೆ ಖಾಸಗೀ ವ್ಯಕ್ತಿಗಳ ಜಮೀನುಗಳ ಮೇಲೂ ಮರಳು ಲಾರಿಗಳು ತಿರುಗಾಡುವುದರಿಂದ ಸದರಿ ಜಮೀನುಗಳಿಗೆ ಧಕ್ಕೆಯಾಗುವುದರ ಜೊತೆಗೆ ಬೆಳೆಗಳು ಕೂಡ ಹಾನಿಯಾಗಿದೆ ಎಂದು ಅಲ್ಲದೆ ಮಣ್ಣಿನ ರಸ್ತೆಗಳು ತಿರುಗಾಡಲಾರದಷ್ಟು ಹಾನಿಗೊಳಗಾಗಿವೆಯೆಂದು ಬರೆದಿರುವುದನ್ನು ಗಮನಿಸಲಾಗಿದೆ. ಈ ಬಾಬ್ತು ಮಾನ್ಯ ಜಿಲ್ಲಾಧಿಕಾರಿಗಳವರು ಪತ್ರವನ್ನು ಬರೆದು ಅಗತ್ಯ ಕ್ರಮ ಕೈಗೊಳ್ಳುವಂತೆ ಉಲ್ಲೇಖ (5)ರ ಪತ್ರದಲ್ಲಿ ಹೇಳಿರುವುದನ್ನು ಗಮನಿಸಲಾಗಿದೆ.

ಇದೂ ಅಲ್ಲದೆ ಪತ್ರಿಕಾ ಮಾಧ್ಯಮದವರು ಪತ್ರಿಕೆಗಳಲ್ಲಿ ವರದಿ ಮಾಡುತ್ತಾ ಅಕ್ರಮ ಮರಳು ತೆಗೆದು ಸಾಗಣೆ ಮಾಡುತ್ತಿರುವುದರಿಂದ ಪರಿಸರದ ಮೇಲೆ ಆಗುವ ದುಷ್ಪರಿಣಾಮ ಮತ್ತು ನದಿಯ ನೀರು ಕಲುಷಿತವಾಗಿ ಈ ನೀರನ್ನು ಪಟ್ಟಣದ ಮತ್ತು ಗ್ರಾಮಗಳ ಜನರು ಕುಡಿಯುವುದರಿಂದ ಆರೋಗ್ಯದ ಮೇಲಾಗುವ ಪರಿಣಾಮವನ್ನು ಮತ್ತು ಹೆಚ್ಚಿನ ಭಾರ ತುಂಬಿದ ಮರಳನ್ನು ಸಾಗಾಣಿಕೆ ಮಾಡುವುದರಿಂದ ರಸ್ತೆಗಳು, ಸೇತುವೆಗಳು, ಹಾಳಾಗಿರುವುದನ್ನು ಈ ಬಾಬ್ತು ಸಾರ್ವಜನಿಕರು ಆಕ್ಷೇಪಣೆ ಮಾಡುತ್ತಿರುವುದನ್ನು ಗಮನಿಸಲಾಗಿದೆ. ಈ ಹಿಂದೆ ನೀಡಿದ ಸೂಚನೆಗಳು ಉಲ್ಲಂಘನೆಯಾಗಿರುವುದನ್ನು ಪರಿಶೀಲಿಸಲಾಗಿದೆ. ಅನೇಕ ಪರಿಸರವಾದಿಗಳು ಈ ಮರಳು ತೆಗೆಯುವುದು, ಸಾಗಣೆ ಮಾಡುವುದನ್ನು ವಿರೋಧಿಸಿ ಅಧಿಕಾರಿಗಳ ಮೇಲೆ, ಜನಪ್ರತಿನಿಧಿಗಳ ಮೇಲೆ ಸಲ್ಲದ ಆರೋಪ ಮಾಡಿರುವುದನ್ನು ಗಮನಿಸಲಾಗಿದೆ. ಉಲ್ಲೇಖ (6) ರಂತೆ ಆರಕ್ಷಕ ವೃತ್ತ ನಿರೀಕ್ಷಕರು, ಹೊಳೆನರಸೀಪುರ ರವರು ಸಹಾ ಮರಳು ಸಾಗಾಣಿಕೆ ತಡೆಗಟ್ಟಲು ಸಿ.ಆರ್.ಪಿ.ಸಿ. ಸೆಕ್ಷನ್ 144 ರಂತೆ ನಿಷೇಧಾಜ್ಞೆ ಜಾರಿಗೊಳಿಸಿಕೊಡಬೇಕೆಂದು ಕೋರಿರುತ್ತಾರೆ.

ಅಲ್ಲದೆ ರಸ್ತೆಗಳು ಹಾಳಾಗಿರುವುದರಿಂದ ವಾಹನಗಳ ಚಾಲನೆಗೆ ತೊಂದರೆಯಾಗಿರುವುದು, ದ್ವಿಚಕ್ರ ವಾಹನದವರು ಬಿದ್ದು ಅಪಘಾತಕ್ಕೆ ಒಳಗಾಗಿರುವುದು, ಇತರೆ ವಾಹನಗಳು ಅಪಘಾತವಾಗಿರುವುದನ್ನು ಗಮನಿಸಲಾಗಿದೆ.

ಮೇಲಿನ ಅಂಶಗಳನ್ನು ಆಧರಿಸಿ ಸಾರ್ವಜನಿಕರು ಈ ಬಾಬ್ತು ದೂರು ಮಾಡಿರುವುದನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಉಲ್ಲೇಖ (2)ರ ಪತ್ರದ ರೀತ್ಯಾ ಹಿರಿಯ ಭೂ ವಿಜ್ಞಾನಿಗಳು, ಹಾಸನ ರವರು ಅಕ್ರಮ ಮರಳು ಸಾಗಾಣಿಕೆ ಮಾಡುತ್ತಿರುವ ಅಂಶವನ್ನು ವಿವರಿಸುತ್ತಾ ಇದನ್ನು ತಡೆಗಟ್ಟಲು ವಿಶೇಷ ಕಾರ್ಯಪಡೆಯನ್ನು ರಚಿಸುವಂತೆ ಕೇಳಿಕೊಂಡಿರುತ್ತಾರೆ. ಅದರಂತೆ ಮಾನ್ಯ ಉಪವಿಭಾಗಾಧಿಕಾರಿಗಳು ದಿನಾಂಕ: 12.4.2005 ರಂದು ಸಭೆ ನಡೆಸಿ ಹಿರಿಯ ಭೂ ವಿಜ್ಞಾನಿಗಳು, ಹಾಸನ, ಆರಕ್ಷಕ ಉಪ ಅಧೀಕ್ಷಕರು, ಹೊಳೆನರಸೀಪುರ, ಸಾರಿಗೆ ಅಧಿಕಾರಿಗಳು, ಹಾಸನ ಜಿಲ್ಲೆ, ತಹಸೀಲ್ದಾರ್, ಹಾಸನ ತಾಲ್ಲೂಕು, ತಹಸೀಲ್ದಾರ್, ಹೊಳೆನರಸೀಪುರ ತಾಲ್ಲೂಕು ರವರುಗಳು ಕೂಡಿ ಚರ್ಚಿಸಿದಂತೆ ಅಕ್ರಮ ಮರಳು ಸಾಗಾಣಿಕೆಯಿಂದ ಇನ್ನು ಮುಂದೆಯೂ ಸಾರ್ವಜನಿಕ ನೆಮ್ಮದಿ ಮತ್ತು ಆಸ್ತಿಗೆ ಭಂಗ ಉಂಟಾಗುವ ಸಾಧ್ಯತೆ ಇರುವುದರಿಂದ ಮತ್ತು ಸಾರ್ವಜನಿಕ ಶಾಂತಿ ಮತ್ತು ಸುರಕ್ಷತೆ ಕಾಪಾಡುವ ದೃಷ್ಟಿಯಿಂದ ಮತ್ತು ಸರ್ಕಾರದ ಖನಿಜ ಸಂಪತ್ತು ಅನಧಿಕೃತವಾಗಿ ಲೂಟಿ ಮಾಡುವ ಸಂಭವ ಇದೆಯೆಂದು ಮನದಟ್ಟಾಗಿರುವುದರಿಂದ ಮೇಲ್ಕಂಡ ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟಲು ಹಿರಿಯ ಭೂ ವಿಜ್ಞಾನಿಗಳು, ಹಾಸನ ರವರ ವರದಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಹಾಗೂ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ಮತ್ತೆ ಉಲ್ಲೇಖ (3) ರಲ್ಲಿ ಕ್ರಮ ವಹಿಸುವಂತೆ ನಿರ್ದೇಶನ ನೀಡಿರುತ್ತಾರೆ. ಅದರಂತೆ ಹೊಳೆನರಸೀಪುರ ತಾಲ್ಲೂಕು ಹಳೇಕೋಟೆ ಹೋಬಳಿ ಹನುಮನಹಳ್ಳಿ ಗ್ರಾಮದಿಂದ ಕಸಬಾ ಹೋಬಳಿ ವಳಂಬಿಗೆ ಗ್ರಾಮದವರೆಗೂ ಹೇಮಾವತಿ ನದಿಯ ಪಾತ್ರದ ಇಕ್ಕೆಲಗಳಲ್ಲಿ ನದಿಯಿಂದ ಹೊರಗಡೆ ಮರಳು ತೆಗೆಯುವುದನ್ನು ಮತ್ತು ಸಾಗಾಣಿಕೆ ಮಾಡುವುದನ್ನು ನಿಷೇಧಿಸಿ ಸಿ.ಆರ್.ಪಿ.ಸಿ. ಕಲಂ 144 ರಂತೆ ನಿಷೇಧಾಜ್ಞೆಯನ್ನು ಹೊರಡಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಒಳಿತು ಎಂದು ಮನಗಂಡು ಈ ಆದೇಶವನ್ನು ಈ ಕೆಳಕಂಡಂತೆ ಹೊರಡಿಸಿದೆ.

### ಆದೇಶ

### ಆದೇಶ ಸಂಖ್ಯೆ: ನಂ. ಎಂ.ಎ.ಜಿ. 81:2005-06, ದಿನಾಂಕ: 16ನೇ ಜುಲೈ 2005

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಕಾಡಯ್ಯ, ಕೆ.ಎ.ಎಸ್., ತಾಲ್ಲೂಕು ಕಾರ್ಯನಿರ್ವಾಹಕ ದಂಡಾಧಿಕಾರಿ, ಹೊಳೆನರಸೀಪುರ ತಾಲ್ಲೂಕು, ಹೊಳೆನರಸೀಪುರ ಆದ ನಾನು ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ ಕಲಂ 144 ರಂತೆ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ದಿನಾಂಕ: 16.7.2005 ರ ಬೆಳಿಗ್ಗೆ 8.00 ಘಂಟೆಯಿಂದ 14.8.2005 ರ ಮಧ್ಯರಾತ್ರಿ 12.00 ಘಂಟೆಯವರೆಗೆ ಈ ಕೆಳಕಂಡಂತೆ ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ.

1. ಪೂರ್ವಾನುಮತಿ ಪಡೆಯದೆ ನದಿಯ ಪಾತ್ರದಲ್ಲಿ (ಅಧಿಕೃತ ಪರವಾನಗಿದಾರರನ್ನು ಬಿಟ್ಟು) ಅಂದರೆ ಪ್ರಸ್ತಾವನೆಯಲ್ಲಿ ಹೇಳಿರುವ ಪ್ರದೇಶದಲ್ಲಿ ಅಂದರೆ ಹಳೇಕೋಟೆ ಹೋಬಳಿ ಹನುಮನಹಳ್ಳಿ ಗ್ರಾಮದಿಂದ ಕಸಬಾ ಹೋಬಳಿ ವಳಂಬಿಗೆ ಗ್ರಾಮದವರೆಗೆ ನದಿಯ ಪಾತ್ರದ ಎರಡೂ ಕಡೆಗಳಲ್ಲಿ ಅನಧಿಕೃತವಾಗಿ ಮರಳು ತೆಗೆಯುವುದು, ಮತ್ತು ಸಾಗಾಣಿಕೆ ಮಾಡುವುದನ್ನು ನಿಷೇಧಿಸಲಾಗಿದೆ.
2. ನದಿಯಲ್ಲಿ ಹಾನಿಕಾರಕವಾದ ಯಂತ್ರೋಪಕರಣಗಳನ್ನು ಬಳಸಿ ಮರಳು ತೆಗೆಯಲು ಪ್ರಯತ್ನ ನಡೆಸುವುದು, ನದಿ ನೀರನ್ನು ಕಲುಷಿತಗೊಳಿಸುವುದು ಮತ್ತು ಅಕ್ರಮವಾಗಿ ಮರಳನ್ನು ಸಾಗಾಣಿಕೆ ಮಾಡುವುದನ್ನು ನಿಷೇಧಿಸಿದೆ.
3. ಈ ವಿಚಾರದಲ್ಲಿ ಸಾರ್ವಜನಿಕ ನೆಮ್ಮದಿಗೆ ಭಂಗ ತರುವಂತೆ ಅಥವಾ ಅಶಾಂತಿಗೆ ಪ್ರೇರೇಪಿಸುವಂತೆ ಕಿರುಚುವುದನ್ನು ನಿಷೇಧಿಸಲಾಗಿದೆ.
4. ಸಾರ್ವಜನಿಕ ನೈತಿಕತೆಗೆ ಭಂಗ ತರುವ ಅಥವಾ ಅಶಾಂತಿಗೆ ಪ್ರೇರೇಪಿಸುವಂತೆ ಕಿರುಚುವುದು, ಹಾಡುವುದು, ವಾದ್ಯವನ್ನು ಭಾರಿಸುವುದು, ಸಂಜ್ಞೆಗಳನ್ನು ಮಾಡುವುದು ಮತ್ತು ಚಿಹ್ನೆಗಳನ್ನು ತೋರಿಸುವುದನ್ನು ನಿಷೇಧಿಸಿದೆ.
5. ಐದು ಜನ ಅಥವಾ ಅದಕ್ಕಿಂತ ಹೆಚ್ಚು ಜನ ಗುಂಪು ಸೇರುವುದನ್ನು ಅಥವಾ ಗುಂಪುಗೂಡಿ ಹೋಗುವುದನ್ನು ನಿಷೇಧಿಸಲಾಗಿದೆ.
6. ಆಘಾತಕಾರಿ ಶಸ್ತ್ರಾಸ್ತ್ರಗಳನ್ನು ಹೊತ್ತು ತಿರುಗುವುದನ್ನು ನಿಷೇಧಿಸಲಾಗಿದೆ. ಯಾರಾದರೂ ಮೇಲ್ಕಂಡ ಅಥವಾ ಮೇಲೆ ತಿಳಿಸಿದ ನದಿ ಪಾತ್ರದಲ್ಲಿ ಮರಳು ತೆಗೆಯುವುದು ಮತ್ತು ಮೇಲೆ ಹೇಳಿದ ವಸ್ತುಗಳನ್ನು ಹೊಂದಿದ್ದಲ್ಲಿ ಆರಕ್ಷಕ ಸಿಬ್ಬಂದಿಯು ಅವರನ್ನು ನಿಶ್ಯಸ್ತ್ರಗೊಳಿಸಿ ಅದನ್ನು ಪಡೆದು ಮುಟ್ಟುಗೋಲು ಹಾಕಿಕೊಳ್ಳುವುದು.

ತಾಲ್ಲೂಕಿನಲ್ಲಿ ಯಾವುದೇ ಅಹಿತಕರ ಘಟನೆ, ಈ ವಿಚಾರದಲ್ಲಿ ನಡೆಯದಂತೆ ಸೂಕ್ತ ಬಿಗಿ ಬಂದೋಬಸ್ತ್ ಮಾಡಲು ಆರಕ್ಷಕ ಇಲಾಖೆಯವರಿಗೆ ಆದೇಶಿಸಲಾಗಿದೆ.

ಈ ತಾಲ್ಲೂಕಿನಲ್ಲಿ ನಡೆಯುವ ಯಾವುದೇ ಚುನಾವಣೆ ಮತ್ತು ನದಿ ದಂಡೆಯಲ್ಲಿ ನಡೆಯುವ ಶವಸಂಸ್ಕಾರ, ಮದುವೆ, ಮತ್ತು ಧಾರ್ಮಿಕ ಕಾರ್ಯಗಳಿಗೆ ಈ ಆದೇಶ ಅನ್ವಯವಾಗುವುದಿಲ್ಲ. ಈ ಆದೇಶವನ್ನು ಮುಖ್ಯ ಸ್ಥಳಗಳಲ್ಲಿ ಅಂಟಿಸುವುದರ ಮೂಲಕ ಪ್ರಚುರಪಡಿಸತಕ್ಕದ್ದು.

ಈ ದಿನ ದಿನಾಂಕ: 16.7.2005 ರಂದು ನನ್ನ ಸ್ವಹಸ್ತದಿಂದ ಸಹಿ ಮಾಡಿ ಮೊಹರು ಹಾಕಿದೆ.

**ಶ್ರೀ ಕಾಡಯ್ಯ, ಕೆ.ಎ.ಎಸ್.,**

ಪಿ.ಆರ್. 1053 ತಾಲ್ಲೂಕು ದಂಡಾಧಿಕಾರಿ, ಹೊಳೆನರಸೀಪುರ ತಾಲ್ಲೂಕು.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ ಇವರ ನ್ಯಾಯಾಲಯ**

**ಪ್ರಕಟಣೆ**

**ಸಂ: ಅರಣ್ಯ/ಗುನ್ನೆ/ವಾಹನ/ಮುಟ್ಟುಗೋಲು/2005-06, ಹಳಿಯಾಳ, ದಿನಾಂಕ: 20ನೇ ಜುಲೈ 2005**

**ವಿಷಯ:** ಅನಧಿಕೃತವಾಗಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು.

ಹಳಿಯಾಳ ವಿಭಾಗದಲ್ಲಿ ಅನಧಿಕೃತವಾಗಿ ಮರಮುಟ್ಟುಗಳ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಸಮಯದಲ್ಲಿ ಗುನ್ನೆಯಲ್ಲಿ ಒಳಗೊಂಡ ಈ ಕೆಳಗಿನ ವಾಹನವನ್ನು ಜಪ್ತಿ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1962 ಸೆಕ್ಷನ್ 71ಎ ದ ಮೇರೆಗೆ ವಿಚಾರಣೆ ನಡೆಸುವ ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು ಇರುತ್ತದೆ.

ಕಾರಣ ಈ ಕೆಳಗೆ ನಮೂದಿಸಿದ ವಾಹನಗಳಿಗೆ ಸಂಬಂಧಿಸಿದ ಮಾಲೀಕರು ತಮ್ಮ ವಾಹನವನ್ನು ಅನಧಿಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಬಳಸಿಲ್ಲವೆಂಬುದನ್ನು ಈ ನ್ಯಾಯಾಲಯದ ಮುಂದೆ ಸಾಬೀತುಪಡಿಸಲು ಒಂದು ಅವಕಾಶವನ್ನು ಈ ಮೂಲಕ ನೀಡಲಾಗಿದೆ. ಈ ಕೆಳಗಿನ ವಾಹನಗಳ ಮಾಲೀಕರು ಈ ಮೇಲೆ ಹೇಳಿದಂತೆ ಸಾಬೀತುಪಡಿಸಲು ವಿಫಲರಾದಲ್ಲಿ ವಾಹನ ಮತ್ತು ಅದರಲ್ಲಿ ಅನಧಿಕೃತವಾಗಿ ಸಾಗಿಸುತ್ತಿದ್ದ ಅರಣ್ಯ ಉತ್ಪನ್ನಗಳನ್ನು ಕರ್ನಾಟಕ ಅರಣ್ಯ ನಿಯಮ 1963 ಸೆಕ್ಷನ್ 71(ಎ) ರ ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಈ ಪ್ರಕಟಣೆ ಹೊರಡಿಸಿದ 30 ದಿವಸಗಳೊಳಗಾಗಿ ಈ ಮೇಲಿನಂತೆ ನಡೆದುಕೊಳ್ಳದಿದ್ದಲ್ಲಿ ಇದೇ ಅಂತಿಮ ಆದೇಶವೆಂದು ಪರಿಗಣಿಸಲಾಗುವುದು.

| ಅ.ನಂ. | ವಾಹನ ವಿವರ | ವಶಪಡಿಸಿಕೊಂಡ ಅರಣ್ಯ ಉತ್ಪನ್ನ | ಚಾಸಿ ನಂ. | ಇಂಜಿನ್ ನಂ. |
|---|---|---|---|---|
| 1 | ಮಾರುತಿ ಓಮಿನಿ KA-28/M-1540 | ಸಾಗ 20=0.149 ಘ.ಮೀ. | 910133 | 452510 |
| 2 | ಸುಜುಕಿ ಮ್ಯಾಕ್ಸ್ 100R KA-29/H-6286 | ಶ್ರೀಗಂಧದ ತುಂಡುಗಳು 6=7.000 ಕೆ.ಜಿ | 808F106240 | 1808M153555 |
| 3 | ಬಜಾಜ್ M-80 K-23/E-8569 | ಶ್ರೀಗಂಧದ ತುಂಡುಗಳು 6=5,000 ಕೆ.ಜಿ | -- | 16E-93F-355740 |

ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 1054 ಹಳಿಯಾಳ ವಿಭಾಗ, ಹಳಿಯಾಳ.

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 239 ಮುನೋಮು 2005, ಬೆಂಗಳೂರು, ದಿನಾಂಕ: 19ನೇ ಜುಲೈ 2005**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ಬಳ್ಳಾರಿ ಜಿಲ್ಲೆ, ಕೊಡಿತಿನಿ ಹಾಗೂ ತಿಮ್ಮಾಪುರ ಗ್ರಾಮದಲ್ಲಿ ಪಡೆದಿರುವ ಒಟ್ಟು 1,734.08 ಎಕರೆ ಜಮೀನಿಗೆ ತಗಲುವ ಮುದ್ರಾಂಕ ಶುಲ್ಕ ರೂ. 43,04,676.00 ಗಳಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(1)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯ್ತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅ.ಟಿ. ಸಂಖ್ಯೆ: ಆಇ 561 ವೆಚ್ಚ-7/05 ದಿನಾಂಕ: 16ನೇ ಜುಲೈ 2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1055 **ಡಿ.ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ನೋಂದಣೆ ಮತ್ತು ಮುದ್ರಾಂಕ)

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್ 02: 2005-06, ದಿನಾಂಕ: 18ನೇ ಜುಲೈ 2005

ಚಿಕ್ಕಬಳ್ಳಾಪುರ ತಾಲ್ಲೂಕು, ನಂದಿ ಹೋಬಳಿ, ಚೆಲುವತಿಮ್ಮನಹಳ್ಳಿ ಗ್ರಾಮದ ಸ.ನಂ. 41 ರಲ್ಲಿ 7.35 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109(1) ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಕಾರ್ಯದರ್ಶಿ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್, ಬೆಳ್ಳೂರು, ನಾಗಮಂಗಲ ತಾಲ್ಲೂಕು ರವರು ನಮೂನೆ 15ಎ ರಲ್ಲಿ ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಲ್ಲಿಸಿದ್ದು ಇದರಂತೆ ತಹಶೀಲ್ದಾರ್ ಚಿಕ್ಕಬಳ್ಳಾಪುರ ತಾಲ್ಲೂಕು ರವರು ನಂ. ಎಲ್‌ಆರ್‌ಎಫ್.ಸಿಆರ್ 21/2005-06 ದಿನಾಂಕ: 1.7.2005 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪ ವಿಭಾಗ ರವರು ಪರಿಶೀಲಿಸಿ ಮೇಲ್ಕಂಡ ಜಮೀನನ್ನು ಕ್ರಯಕ್ಕೆ ಪಡೆಯಲು ಅರ್ಜಿದಾರರಿಗೆ ಅನುಮತಿಯನ್ನು ನೀಡಲು ಪತ್ರ ನಂ. ಎಲ್‌ಆರ್‌ಎಫ್.ಸಿಆರ್ 53ಎ/2005-06 ದಿನಾಂಕ: 5.7.2005 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಚಿಕ್ಕಬಳ್ಳಾಪುರ ತಾಲ್ಲೂಕು, ನಂದಿ ಹೋಬಳಿ, ಚೆಲುವತಿಮ್ಮನಹಳ್ಳಿ ಗ್ರಾಮದ ಸ.ನಂ. 41ರ 7-35 ಎಕರೆ ಜಮೀನು ಹುಸೇನ್ ಬೀ ಕೋಂ ಲೇಟ್ ಫಕ್ರುದ್ದೀನ್ ಸಾಬಿ ಮತ್ತು ಇವರ ಮಕ್ಕಳಾದ ಸತ್ತಾರ್ ಸಾಬ್, ಫಕೀರ್ ಸಾಬ್, ಇಸ್ಮಾಯಿಲ್ ಸಾಬ್ ಮತ್ತು ಕಾದರ್ ಸಾಬ್ ಮತ್ತು ಷೇಕ್ ಜಹಾಂಗೀರ್ ಅಲಿಯಾಸ್ ಪ್ಯಾರೇಜಾನ್ ಬಿನ್ ಮಹಮದ್ ಹಸ್ನಾನ್ ಸಾಬ್ ಎಂಬುವವರ ಹೆಸರಿನಲ್ಲಿರುತ್ತೆ. ಈ ಜಮೀನುಗಳು ಪಿತ್ರಾರ್ಜಿತ ಆಸ್ತಿಯಾಗಿರುತ್ತೆ. ಈ ಜಮೀನನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಪ್ರಸ್ತಾಪಿತ ಜಮೀನುಗಳು ಹಿಡುವಳಿ ಜಮೀನುಗಳಾಗಿರುತ್ತೆ. ಸದರಿ ಜಮೀನುಗಳು ಭೂ ಮಂಜೂರಾತಿ ನಿಯಮಗಳಿಗೆ, ಭೂ ಸುಧಾರಣೆ ಕಾಯ್ದೆ ಇನಾಂ ರದ್ದಿಯಾತಿ ಕಾಯಿದೆ ಮತ್ತು ಪಿಟಿಸಿಎಲ್ ಕಾಯಿದೆಯ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿಗೆ ಸಂಬಂಧಿಸಿದಂತೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಶ್ರೀ ಆದಿ ಚುಂಚನಗಿರಿ ಟ್ರಸ್ಟ್ ನಂ. 1891/73-74 ದಿನಾಂಕ: 10.1.74 ರಂತೆ ಉಪ ನೋಂದಣಾಧಿಕಾರಿಗಳು, ಬೆಳ್ಳೂರು, ನಾಗಮಂಗಲ ತಾಲ್ಲೂಕು ರವರ ಕಛೇರಿಯಲ್ಲಿ ನೋಂದಣಿಯಾಗಿರುತ್ತೆ. ಅರ್ಜಿದಾರರು ಪ್ರಸ್ತಾಪಿತ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಉದ್ದೇಶಿಸಿದ್ದು ಈ ಸಂಬಂಧ ಇವರು ಸಲ್ಲಿಸಿರುವ ದಾಖಲೆಗಳು ಸದರಿ ಉದ್ದೇಶಕ್ಕೆ ಪೂರಕವಾಗಿರುತ್ತೆ. ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಬಳ್ಳಾಪುರ ರವರು ಪತ್ರ ನಂ. ಅನುದಾನ 1/840 ಜಖ 29/2005-06 ದಿನಾಂಕ: 16.6.2005 ರಂತೆ ಅರ್ಜಿದಾರರು ಮೇಲ್ಕಂಡ ಜಮೀನನ್ನು ಪ್ರಸ್ತಾಪಿತ ಉದ್ದೇಶಕ್ಕೆ ಕ್ರಯಕ್ಕೆ ಪಡೆಯಲು ನಿರಾಕ್ಷೇಪಣಾ ಪತ್ರವನ್ನು ನೀಡಿರುತ್ತಾರೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001, ಬೆಂಗಳೂರು ದಿನಾಂಕ: 23.4.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii)ಕ್ಕೆ ಅನುಗುಣವಾಗಿರುವುದರಿಂದ ಚಿಕ್ಕಬಳ್ಳಾಪುರ ತಾಲ್ಲೂಕು, ನಂದಿ ಹೋಬಳಿ, ಚೆಲುವತಿಮ್ಮನಹಳ್ಳಿ, ಗ್ರಾಮದ ಸ.ನಂ. 41 ರಲ್ಲಿ 7-35 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕಾರ್ಯದರ್ಶಿ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್, ಬೆಳ್ಳೂರು, ನಾಗಮಂಗಲ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii)ರ ಅಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ : ಓ.ಡಿ.ಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (i)(ii) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 2002 ರ ಕಲಂ 109 (i)(ii) ರಂತೆ ಗರಿಷ್ಠ ಮಿತಿಗೆ ಒಳಪಟ್ಟು ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಿರುತ್ತೆ.

**ಜಿಲ್ಲಾಧಿಕಾರಿಗಳು,**
ಕೋಲಾರ ಜಿಲ್ಲೆ.

ಪಿ.ಆರ್. 1056

**ಉಪ ವಿಭಾಗದ ದಂಡಾಧಿಕಾರಿ, ಕುಂದಾಪುರ ಉಪ ವಿಭಾಗ, ಕುಂದಾಪುರ ಇವರ ಅಧಿಸೂಚನೆ**
**ಎಂಎಜಿ.ಸಿಆರ್ 89/2005-06, ದಿನಾಂಕ: 18ನೇ ಜುಲೈ 2005**

ಉಡುಪಿ ತಾಲ್ಲೂಕು, ಪುತ್ತೂರು ಗ್ರಾಮದ ಸ.ನಂ. 232/3ಸಿ ಮತ್ತು 233/2ಸಿ4 ರಲ್ಲಿ ಪ್ರಾರ್ಥನಾ ಮಂದಿರ ನಿರ್ಮಿಸಲು ಉದ್ದೇಶಿಸಿದ ಕುರಿತು, ಪುತ್ತೂರು ಗ್ರಾಮದ ಸುಬ್ರಹ್ಮಣ್ಯ ನಗರ ಮತ್ತು ಬಬ್ಬು ಸ್ವಾಮೀ ದೇವಸ್ಥಾನ ಪರಿಸರದಲ್ಲಿ ಪ್ರಾರ್ಥನಾ ಮಂದಿರಾ ನಿರ್ಮಾಣ ಮಾಡ ಬಯಸುವ ಕ್ರಿಶ್ಚಿಯನ್ ಸಮುದಾಯ ಮತ್ತು ಪ್ರಾರ್ಥನಾ ಮಂದಿರ ನಿರ್ಮಾಣವನ್ನು ವಿರೋಧಿಸುವ ಹಿಂದು ಸಂಘಟನೆ ಮತ್ತು ದಲಿತ ರಕ್ಷಣಾ ಸಮಿತಿ ಇವರ ಮಧ್ಯೆ ಸಂಘರ್ಷ ಉಂಟಾಗಿ ಸಾರ್ವಜನಿಕ ಶಾಂತಿಗೆ ಭಂಗ ಉಂಟಾಗುವ ಸಾಧ್ಯತೆ ಇರುವುದಾಗಿ ಪೊಲೀಸ್ ವೃತ್ತ ನಿರೀಕ್ಷಕರು ಉಡುಪಿ ಇವರು ದಿನಾಂಕ: 18.7.2005 ರಂದು ವರದಿಯನ್ನು ನೀಡಿರುತ್ತಾರೆ. ಉಡುಪಿ ಪೊಲೀಸ್ ವೃತ್ತ ನಿರೀಕ್ಷಕರು ನೀಡಿದ ವರದಿಯನ್ನು ಪರಿಗಣಿಸಿ ಉಡುಪಿ ತಾಲ್ಲೂಕು ಪುತ್ತೂರು ಗ್ರಾಮದ ಸ.ನಂ. 232/3ಸಿ ಮತ್ತು 233/2ಸಿ4 ರಲ್ಲಿ ಪ್ರಾರ್ಥನಾ ಮಂದಿರ ನಿರ್ಮಿಸಲು ಉದ್ದೇಶಿಸಿದ ಸ್ಥಳ, ಸುಬ್ರಹ್ಮಣ್ಯ ನಗರ ಮತ್ತು ಬಬ್ಬು ಸ್ವಾಮೀ ದೇವಸ್ಥಾನ ಪರಿಸರದ ಸುತ್ತ ಮುತ್ತಲಿನ ಪ್ರದೇಶದ 200 ಮೀ ವ್ಯಾಪ್ತಿಯಲ್ಲಿ ಮುಂಜಾಗ್ರತಾ ಕ್ರಮವಾಗಿ ಕಾನೂನು ಸುವ್ಯವಸ್ಥೆ ಪಾಲನೆಯ ಹಿತದೃಷ್ಟಿಯಿಂದ ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ 1973ರ ಕಲಂ 144 ರಂತೆ ನಿಷೇಧಾಜ್ಞೆಯನ್ನು ಜಾರಿಗೊಳಿಸುವುದು ಅಗತ್ಯವೆಂದು ಮನಗಂಡು, ಮದನ್. ಜಿ. ನಾಯಕ್, ಕುಂದಾಪುರ ಉಪ ವಿಭಾಗದ ದಂಡಾಧಿಕಾರಿ ಆದ ನಾನು ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ 1973ರ ಕಲಂ 144 ರಂತೆ ನಿಷೇದಾಜ್ಞೆಯನ್ನು ಈ ಮೂಲಕ ಹೊರಡಿಸಿ, ಆದೇಶಿಸಿರುತ್ತೇನೆ.

1. ಯಾವುದೇ ಸಾರ್ವಜನಿಕರು 5 ಜನರು ಯಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ನಿಷೇಧಾಜ್ಞೆ ಜಾರಿಗೊಳಿಸಿದ ವ್ಯಾಪ್ತಿಯಲ್ಲಿನ ಪ್ರದೇಶದಲ್ಲಿ ಗುಂಪು ಸೇರುವುದು ಯಾ ತಿರುಗುವುದು ನಿಷೇಧಿಸಿದೆ.
2. ಯಾವುದೇ ಆಯುಧ, ಕುಡುಗೋಲು, ಖಡ್ಗ, ಭರ್ಜಿ, ಗಧೆ, ಕೋಲು, ಚೂರಿ, ದೊಣ್ಣೆ, ಲಾಠಿ ಅಥವಾ ದೈಹಿಕ ಹಿಂಸೆಗೆ ಕಾರಣವಾಗುವ ಅಥವಾ ಮಾರಕವಾಗುವ ಇನ್ನಾವುದೇ ವಸ್ತುಗಳನ್ನು ಧರಿಸುವುದನ್ನು ನಿಷೇಧಿಸಿದೆ.
3. ಯಾವುದೇ ಕ್ಷಾರಕ ಯಾ ಸ್ಫೋಟಕ ವಸ್ತುಗಳನ್ನು ಹೊಂದುವುದನ್ನು ನಿಷೇಧಿಸಿದೆ.
4. ಯಾವುದೇ ಕಲ್ಲುಗಳನ್ನು ಒಟ್ಟುಗೂಡಿಸುವುದು, ತಯಾರಿಸುವುದು ಯಾ ಕ್ಷಿಪಣಿಗಳು ಅಥವಾ ಇತರ ಕ್ಷಿಪಣಿಯಾಗಿ ಉಪಯೋಗಿಸಲ್ಪಡುವ ಅವಕಾಶವಿರುವ ಇತರ ಆಯುಧಗಳು ಸಾಧನ ಸಾಮಗ್ರಿಗಳನ್ನು ಧರಿಸುವುದನ್ನು ನಿಷೇಧಿಸಿದೆ.
5. ಮನುಷ್ಯರ ಆಕೃತಿ, ಶರೀರ, ಪ್ರತಿಮೆ, ಬೊಂಬೆ ಪ್ರದರ್ಶನ ನಿಷೇಧಿಸಿದೆ.
6. ಸಾರ್ವಜನಿಕವಾಗಿ ಯಾವುದೇ ಕೂಗನ್ನು ಉಚ್ಚರಿಸುವುದು, ಪದ ಹಾಡುವುದು ಗಾಯನ ಮಾಡುವುದು, ಆವೇಶ ಭಾಷಣ ಮಾಡುವುದು, ಸಂಜ್ಞೆಗಳನ್ನು ಉಪಯೋಗಿಸುವುದು, ಚೇಷ್ಠೆ ಮಾಡುವುದು ಮತ್ತು ಚಿತ್ರಗಳ ಪ್ರದರ್ಶನ ತಯಾರಿಸುವುದು, ಯಾ ಪ್ರಸಾರ ಮಾಡುವುದು, ಗುರುತುಗಳು ಪ್ರಕಟನಾ ಪತ್ರಿಕೆಗಳ ಯಾ ಇತರ ಯಾವುದೇ ವಸ್ತುಗಳ ಪ್ರದರ್ಶನದಿಂದ ಸಭ್ಯತನ, ಸದಾಚಾರ, ಸಾರ್ವಜನಿಕ ಹಿತ ಯಾ ಭದ್ರತೆ ಶಿಥಿಲಗೊಳ್ಳುವಂತಹ ಯಾ ಸರಕಾರವನ್ನು ಕೆದಕುವ ಯಾ ಅಪರಾಧವೆಸಗುವ, ಪ್ರೇರೇಪಿಸುವ ಕ್ರಮವನ್ನು ನಿಷೇಧಿಸಿದೆ.

ಈ ಆದೇಶವು ದಿನಾಂಕ: 18.7.2005ರ ಅಪರಾಹ್ನ 5.00 ಗಂಟೆಯಿಂದ ದಿನಾಂಕ: 23.7.2005ರ ಮಧ್ಯರಾತ್ರಿವರೆಗೆ ಜಾರಿಯಲ್ಲಿರುತ್ತದೆ.

ಈ ಆದೇಶವು ಸರಕಾರದಿಂದ ಯಾ ಸರಕಾರದ ಆದೇಶದಂತೆ ನಡೆಸಲ್ಪಡುವ ಯಾವುದೇ ಕಾರ್ಯಕ್ರಮ ಸಭೆ, ಸಮಾರಂಭಗಳಿಗೆ ಅನ್ವಯಿಸುವುದಿಲ್ಲ ಮತ್ತು ಸರಕಾರಿ ನೌಕರರ ಕರ್ತವ್ಯ ನಿರ್ವಹಣೆಯ ವೇಳೆ ಲಾಠಿಗಳನ್ನು ಉಪಯೋಗಿಸುವುದಕ್ಕೆ ಅನ್ವಯಿಸುವುದಿಲ್ಲ.

ಈ ಆದೇಶವು ಕೆಳಗೆ ಸಹಿ ಮಾಡಿದವರ ಪೂರ್ವಾನುಮತಿಯನ್ನು ಪಡೆದು ನಡೆಯುವ ಶವ ಮೆರವಣಿಗೆ, ಮದುವೆ ಮೆರವಣಿಗೆ ಮತ್ತು ಧಾರ್ಮಿಕ ಸಮಾರಂಭ ಮತ್ತು ಶಾಲಾ ಕಾಲೇಜುಗಳಲ್ಲಿ ನಡೆಯುವ ಸಭೆ ಸಮಾರಂಭಗಳಿಗೆ ಅನ್ವಯಿಸುವುದಿಲ್ಲ.

ಈ ಆದೇಶವನ್ನು ದಿನಾಂಕ: 18.7.2005 ರಂದು ನನ್ನ ಸ್ವ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮುದ್ರೆಯ ಒಪ್ಪಿಗೆಯೊಂದಿಗೆ ಹೊರಡಿಸಲಾಗಿದೆ.

ಉಪ ವಿಭಾಗದ ದಂಡಾಧಿಕಾರಿ
ಪಿ.ಆರ್. 1057 ಕುಂದಾಪುರ ಉಪ ವಿಭಾಗ, ಕುಂದಾಪುರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**
**ಸಂಖ್ಯೆ: ಸನಿ47:ವಿ.ಸೇ:16:2005-06, ದಿನಾಂಕ: 19ನೇ ಜುಲೈ 2005**

**ವಿಷಯ:** ಮಾದೇಶ್ವರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1) ಸಂಘದ ನಿರ್ದೇಶಕರುಗಳ ರಾಜೀನಾಮೆ ಪತ್ರಗಳು, ದಿನಾಂಕ: 2.4.2005 ಹಾಗೂ 1.7.2005.
2) ಕಾರ್ಯದರ್ಶಿ, ಮಾದೇಶ್ವರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಇವರ ಪತ್ರ ದಿನಾಂಕ: 16.7.2005.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:ಸಿಎಲ್ಎಂ: 69:2001, ದಿನಾಂಕ: 21.11.2001.

**ಪ್ರಸ್ತಾವನೆ:**

ಮಾದೇಶ್ವರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಇದರ ಆಡಳಿತ ಮಂಡಳಿಯ ಎಲ್ಲಾ ನಿರ್ದೇಶಕರುಗಳೂ ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿರುವುದರಿಂದ, ಸಮಿತಿ ಸದಸ್ಯರ ಸಂಖ್ಯೆಯು ಸಭೆಯು ಅವಶ್ಯಕ ಸಂಖ್ಯೆ (ಕೋರಂಗೆ) ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಲ್ಲದೇ ಶೂನ್ಯವಾಗಿರುವುದರಿಂದ ಕಲಂ 31(1) ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಉಲ್ಲೇಖಿತ ಸರ್ಕಾರದ ಅಧಿಸೂಚನೆಯನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಮಾದೇಶ್ವರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ಮಾರ್ಗ ವಿಸ್ತರಣಾಧಿಕಾರಿಗಳು ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ, ದೊಡ್ಡಬಳ್ಳಾಪುರ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರಾವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 19ನೇ ಜುಲೈ 2005 ರಂದು ಹೊರಡಿಸಿರುತ್ತೇನೆ.

**ಎಂ.ಡಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 1058

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:149/2005, ದಿನಾಂಕ: 23ನೇ ಜುಲೈ 2005**

**ಅರ್ಜಿದಾರರು:**
1) ಶ್ರೀಮತಿ ಲಲಿತಾಬಾಯಿ ಗಂಡ ಅಮರಪ್ಪ ಉರ್ಫ್ ಅಂಬರೀಶ ಬಡಿಗೇರ
2) ಕು: ಸವಿತಾ ತಂದೆ ಅಮರಪ್ಪ
3) ಕು: ದೇವರಾಜ ತಂದೆ ಅಮರಪ್ಪ
4) ಕು: ಮಣಿಕಂಠ ತಂದೆ ಅಮರಪ್ಪ
ವಾಸ: ಹುನಗುಂದ
ಸದ್ಯದ ವಾಸ: ಮುದ್ದೇಬಿಹಾಳ

**ವಿರುದ್ಧ**

**ಪ್ರತಿವಾದಿಗಳು:**
1) ಬಂಗಾರಗೌಡ ತಂದೆ ಗುರುಲಿಂಗಪ್ಪ ತಗ್ಗಿನಮನಿ,
ವಾಸ: ಶಹಾಪೇಟ ಗಲ್ಲಿ, ಬಿಜಾಪುರ
ಸದ್ಯದ ವಾಸ: ವಾಣಿಪೇಟ, ಹುನಗುಂದ
2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ

**ಪ್ರಕಟಣೆ**

ಶ್ರೀ:ಶ್ರೀಮತಿ ಲಲಿತಾಬಾಯಿ ಗಂಡ ಅಮರಪ್ಪ ಉರ್ಫ್ ಅಂಬರೀಶ ಬಡಿಗೇರ 2) ಕು: ಸವಿತಾ ತಂದೆ ಅಮರಪ್ಪ, 3) ಕು: ದೇವರಾಜ ತಂದೆ ಅಮರಪ್ಪ 4) ಕು: ಮಣಿಕಂಠ ತಂದೆ ಅಮರಪ್ಪ ಇವರುಗಳಾದ ತಾವು ಮೃತ ಅಮರಪ್ಪ ಉರ್ಫ್ ಅಂಬರೀಶ ಬಡಿಗೇರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಮರಪ್ಪ ಉರ್ಫ್ ಅಂಬರೀಶ ಬಡಿಗೇರ ರವರು ಒಂದನೇ ಪ್ರತಿವಾದಿಗಳಾದ ಬಂಗಾರಗೌಡ ತಂದೆ ಗುರುಲಿಂಗಪ್ಪ ತಗ್ಗಿನಮನಿ ಇವರ ಲಾರಿ ನಂ. ಎಂಹೆಚ್-04:ಪಿ-5755 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 1059

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ/ಎಸ್ಆರ್-158/2005, ದಿನಾಂಕ: 28ನೇ ಜುಲೈ 2005**

**ಅರ್ಜಿದಾರರು:**
1) ಶಾಂತಾಬಾಯಿ ಗಂಡ ಚಂದು ರಾಠೋಡ ಉರ್ಫ್ ನಾಯಿಕ್
2) ವಿಲಾಸ ತಂದೆ ಚಂದು ರಾಠೋಡ ಉರ್ಫ್ ನಾಯಿಕ್
3) ರವಿ ತಂದೆ ಚಂದು ರಾಠೋಡ ಉರ್ಫ್ ನಾಯಿಕ್
4) ಅನಿಲ ತಂದೆ ಚಂದು ರಾಠೋಡ ಉರ್ಫ್ ನಾಯಿಕ್
ವಾಸ: ಜಲನಗರ, ಬಿಜಾಪೂರ.

**ವಿರುದ್ಧ**

**ಪ್ರತಿವಾದಿಗಳು:**
1) ಗುರಪ್ಪ ಕೆ. ಕುರಬಾರ
ವಾಸ: ಜಿರಂಕಲಗಿ,
ತಾ: ಇಂಡಿ, ಜಿಲ್ಲೆ: ಬಿಜಾಪೂರ
2) ದಿ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ. ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ ಶಾಂತಾಬಾಯಿ ಗಂಡ ಚಂದು ರಾಠೋಡ ಉರ್ಫ್ ನಾಯಿಕ್ 2) ವಿಲಾಸ 3) ರವಿ 4) ಅನಿಲ ಇವರುಗಳಾದ ತಾವು ಮೃತ ಚಂದು ಶಂಕರ ರಾಠೋಡ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಚಂದು ಶಂಕರ ರಾಠೋಡ ರವರು ಒಂದನೇ ಪ್ರತಿವಾದಿಗಳಾದ ಗುರಪ್ಪ ಕೆ. ಕುರಬಾರ ಇವರ ಟ್ರ್ಯಾಕ್ಟರ್ ಟ್ರೇಲರ್ ನಂ. ಕೆಎ-28 ಟಿ-8244-8245 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ

ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 1060

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-, ದಿನಾಂಕ: 26ನೇ ಜುಲೈ 2005**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ಶ್ರೀ ವಿಜಯನ್ ನಾಯರ್ ಸನ್ಆಫ್ ಗೋಪಾಲನ್ ನಾಯರ್<br>2) ಶ್ರೀಮತಿ ಭವಾನಿಕುಟ್ಟಿ ಅಮ್ಮ ಜಿ. ವಿಜಯನ್ ನಾಯರ್ರವರ ಪತ್ನಿ ಕಲಾತಿ ಪರಫಿ<br>(ಲೆ ಮಹಾದೇವಿಕ್ಕಾಡ್ ಅಂಚೆ ಕಾರ್ತಿಕಪಲ್ಲಿ ಅಲೆಪಿ ಜಿಲ್ಲೆ, ಕೇರಳ ರಾಜ್ಯ) | | ಕನ್ಸೋಲಿಡೆಟೆಡ್ ಇಂಜಿನಿಯರಿಂಗ್ ಕನ್ಸ್ಟ್ರಕ್ಷನ್ ಕಂ. 65:1, ಮೋದಿ ಕೋರ್ಟ್, 1ನೇ ಮಹಡಿ, ಮಿಲ್ಲರ್ಸ್ ರೋಡ್ ಬೆನ್ಸನ್ ಟೌನ್, ಬೆಂಗಳೂರು-560 046.<br>ದಿ ಓರಿಯಂಟಲ್ ಇನ್ಸುರೆನ್ಸ್ ಕಂ.ಲಿ. 401:2, ಎಫ್-1, ಸ್ವಸ್ತಿಕ್ ಮಾನಾಂದಿ ಆರ್ಕೆಡ್ ಎಸ್.ಸಿ. ರೋಡ್, ಶೇಷಾದ್ರಿಪುರಂ ಪೊಲೀಸ್ ಸ್ಟೇಶನ್, ಬೆಂಗಳೂರು-20. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ವಿಜಯನ್ ಇವರು ತಮ್ಮ ಮಗನಾದ:ಗಂಡನಾದ ಶ್ರೀ ಅನಿಲ್ಕುಮಾರ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ಅವರು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

ಪಿ.ಆರ್. 1061

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-14/ಎಫ್ಸಿ/2005, ದಿನಾಂಕ: 22ನೇ ಜುಲೈ 2005**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಶ್ರೀಮತಿ ಜೋಹಾರ ದಿ. ಮೆಹಮೂದ್ರವರ ಪತ್ನಿ<br>2. ರಿಜಾವಾನ<br>3. ಜಕಾವಾನ<br>4. ಜಿಯಾನ<br>5. ದಿಶಾನ<br>6. ಕತೀಜಾ ಬೈ<br>ವಾಸ: ನಾಷಿಯಾ ಮಂಜಿಲೆ ಆರ್.ಡಿ. ನಗರ, ಕೆಳರಗುಡ್ಡೆ, ಕಾಸರಗೋಡು | | 1. ಶ್ರೀ ಎಸ್.ಕೆ. ಸಂತೋಶನ್ ಸನ್ಆಫ್ ಕುನಿರಾಮನ್ ಕೆ.ಆರ್. ಸವಾತೆ ಕೆಳಕಲ ಹೌಸ್, ಅನಂಗೂರು, ಕಾಸರಗೋಡು<br>2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ಗೋಕುಲೆ ಬಿಲ್ಡಿಂಗ್, ಎಂ.ಜಿ. ರೋಡ್, ಕಾಸರಗೋಡು. |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಜೋಹಾರ ಇವರು ತಮ್ಮ ಗಂಡನಾದ ಮೆಹಮೂದ್ ಇವರು ಪ್ರತಿವಾದಿಗಳಾದ ಶ್ರೀ ಎಸ್.ಕೆ. ಸಂತೋಷನ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 6.11.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 1062